


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 878 (1136)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಗ್ರಾಮೀಣ ಪ್ರದೇಶದ ಸ್ಮಶಾನಗಳು ಮತ್ತು ಚಿತಾಗಾರದ ನಿರ್ವಹಣೆಯ ಕುರಿತು

(ಅ) ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿ ಗ್ರಾಮ ಪಂಚಾಯಿತಿ ಸ್ವಾಧೀನತೆಯನ್ನು ಹೊಂದಿರುವ ಸ್ಮಶಾನ ಭೂಮಿಗಳ ಸಂಖ್ಯೆ ಎಷ್ಟು ; ಅವುಗಳಲ್ಲಿ ಗಡಿ ಗುರುತನ್ನು ಮಾಡಲಾದ ಮತ್ತು ಆವರಣ ಗೋಡೆಯನ್ನು ಹೊಂದಿರುವ ಸ್ಮಶಾನಗಳ ಸಂಖ್ಯೆ ಎಷ್ಟು ; (ಜಿಲ್ಲಾವಾರು, ತಾಲ್ಲೂಕುವಾರು ಗ್ರಾಮವಾರು ಮಾಹಿತಿಯನ್ನು ನೀಡುವುದು)

(ಆ) ಇವುಗಳಲ್ಲಿ ಮೂಲಸೌಕರ್ಯಗಳಾದ ಚಿತಾಗಾರ ವಿಶ್ರಾಂತ ಸ್ಥಳ ದಾಸ್ತಾನು ಕೊಠಡಿ ನೀರಿನ ವ್ಯವಸ್ಥೆಯನ್ನು ಹೊಂದಿರುವ ಸ್ಮಶಾನಗಳ ಸಂಖ್ಯೆ ಎಷ್ಟು ; ಕಳೆದ ಮೂರು ವರ್ಷಗಳಲ್ಲಿ ಇವುಗಳ ನಿರ್ವಹಣೆಗೆ ಸರ್ಕಾರದಿಂದ ಮಂಜೂರಾದ ಮತ್ತು ಗ್ರಾಮ ಪಂಚಾಯಿತಿಯ ಸ್ವಂತ ಸಂಪನ್ಮೂಲದಿಂದ ಭರಿಸಲಾದ ಅನುದಾನ ಎಷ್ಟು ; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ರಾಜ್ಯದಲ್ಲಿ ಕಟ್ಟಿಗೆ ಚಿತಾಗಾರ, ವಿದ್ಯುತ್ ಚಿತಾಗಾರ ಮತ್ತು ಗ್ಯಾಸ್ ಚಿತಾಗಾರವನ್ನು ಹೊಂದಿರುವ ಗ್ರಾಮ ಪಂಚಾಯಿತಿಗಳ ಸಂಖ್ಯೆ ಎಷ್ಟು ; ಪ್ರತಿ ಗ್ರಾಮ ಪಂಚಾಯಿತಿಯು ತನ್ನ ಕನಿಷ್ಠ ಮೂಲ ಅವಶ್ಯಕತೆಯಾದ ಸ್ಮಶಾನ ಭೂಮಿಯನ್ನು ಮತ್ತು ಅದರ ಮೂಲ ಸೌಕರ್ಯವನ್ನು ಹೊಂದುವ ದೃಷ್ಠಿಯಲ್ಲಿ ಸರ್ಕಾರದ ಕ್ರಮವೇನು?